


# ಜ್ಯೋತಿಷ್ಯ ಮಿತ್ರ

## ಆನ್‌ಲೈನ್ ದಿನಪತ್ರಿಕೆ

www.jyothishamithra.com

ಸಂಚಿಕೆ : 1308 02-04-2022 ಶನಿವಾರ

ಪ್ಲವನಾಮ ಸಂವತ್ಸರ ಉತ್ತರಾಯಣ ಶಿಶಿರಋತು ಫಾಲ್ಗುನಮಾಸ ಕೃಷ್ಣಪಕ್ಷ

| ನಿತ್ಯ ಪಂಚಾಂಗ | ಸುಜ್ಞಾನ |
|---|---|
| ತಿಥಿ : ಪಾಡ್ಯ (11:57)<br>ನಕ್ಷತ್ರ : ರೇವತೀ (11:20)<br>ರಾಹುಕಾಲ :<br>09:30 AM - 11:01 AM<br>ಗುಳಿಕಕಾಲ :<br>06:26 AM - 07:58 AM | ಚಿಂತಿಸುವುದರಿಂದ ಯಾವುದನ್ನೂ ತಪ್ಪಿಸಿಕೊಳ್ಳಲಾಗದು. ಅಷ್ಟೇ ಅಲ್ಲ, ಅದು ನಮ್ಮ ಸಂತೋಷವನ್ನು ಕಸಿದುಕೊಳ್ಳುತ್ತದೆ. |



# ಯುಗಾದಿ ವಿಶೇಷ

ಯುಗಾದಿಯ ಅರ್ಥ 'ಯುಗದ ಆದಿ'. 'ಯುಗಾದಿ' ಎಂಬ ಶಬ್ದ ಸಂಸ್ಕೃತದ 'ಯುಗ' ಮತ್ತು 'ಆದಿ' ಎಂಬ ಎರಡು ಶಬ್ದಗಳಿಂದ ಕೂಡಿದೆ. ಯುಗವೆಂದರೆ ಸೃಷ್ಟಿಯ ಕಾಲಮಾನ. ಅರ್ಥಾತ್ ಹೊಸ ವರ್ಷ; ಆದಿ ಎಂದರೆ ಆರಂಭ. ಹೊಸ ವರ್ಷದ ಮೊದಲ ದಿನ ಹಾಗೂ ಬ್ರಹ್ಮಾಂಡವು ಸೃಷ್ಟಿಯಾದ ದಿನವಾಗಿರುವ ಯುಗಾದಿಯಂದು ಪ್ರಕೃತಿ ಮಾತೆಯು ನವಚೈತನ್ಯವನ್ನ ತುಂಬಿಕೊಂಡು, ಪೂರ್ಣ ಪ್ರಮಾಣದ ಬಿಸಿಲಿನಲ್ಲಿ ಹಸಿರು ಹಸಿರಾಗಿ ಕಂಗೊಳಿಸುತ್ತಾ ಫಲಪುಷ್ಪಗಳನ್ನ ಮನುಕುಲಕ್ಕೆ ಉಡುಗೊರೆಯಾಗಿ ನೀಡುವ ಕಾಲವಿದು.

ಯುಗಾದಿ ಹಬ್ಬವು ಪೌರಾಣಿಕ ಹಾಗೂ ಐತಿಹಾಸಿಕ ವಿಶೇಷತೆಗಳ ದಿನವಾಗಿದೆ. ಚೈತ್ರಶುದ್ಧ ಪಾಡ್ಯದಂದು ಸೂರ್ಯೋದಯ ವಾಗುತ್ತಿರುವಾಗ ಬ್ರಹ್ಮನು ವಿಶ್ವವನ್ನು ಸೃಷ್ಟಿಸಿದನೆಂದೂ, ಅಂದಿನಿಂದ ಕಾಲಗಣನೆಗಾಗಿ ಗ್ರಹ – ನಕ್ಷತ್ರ – ಮಾಸ – ಋತು - ವರ್ಷ ಇವುಗಳನ್ನು ಏರ್ಪಡಿಸಿದನೆಂದೂ ವ್ರತಖಂಡದಲ್ಲೂ ಪುರಾಣಗಳಲ್ಲೂ ಉಲ್ಲೇಖವಿದೆ.



ಪಂಚಾಂಗಗಳೂ ಇದನ್ನೇ ಹೇಳುತ್ತವೆ. ವೇದಗಳ ಕಾಲದಿಂದಲೂ ಯುಗಾದಿಯ ಮಹಿಮೆ ಇವೆ. ಎಲ್ಲ ಶಾಸ್ತ್ರ, ಗ್ರಂಥಗಳಲ್ಲಿ ಯುಗಾದಿಯನ್ನು ಕುರಿತು ಹೇಳಲಾಗಿದೆ. ಶ್ರೀರಾಮನು ರಾವಣನನ್ನು ಸಂಹರಿಸಿ ಬಂದಾಗ

ಅಯೋಧ್ಯೆಯಲ್ಲಿ ಶ್ರೀರಾಮಚಂದ್ರನ ಪಟ್ಟಾಭಿಷೇಕವಾದ



ದಿನ. ಅಲ್ಲದೆ ಮಹಾಭಾರತದಲ್ಲಿ ಬರುವ ಚೇದಿ ರಾಜ್ಯದ ಅರಸು ವಸುವಿನ ಉಗ್ರ ತಪಸ್ಸಿಗೆ ಮೆಚ್ಚಿದ ಇಂದ್ರನು ವೈಜಯಂತಿ ಮಾಲೆಯನ್ನು ಅವನಿಗೆ ಕೊಟ್ಟು, ಚಿನ್ನದ ಕಲಶವುಳ್ಳ ಚಕ್ರಾಧಿಪತ್ಯದ ಧ್ವಜವನ್ನು ರಾಜನ ತಲೆಯ ಮೇಲೆ ಇಟ್ಟಿರುವ ದಿನ.

ದಕ್ಷಿಣ ಭಾರತವನ್ನು ಆಳಿದ ಶಾಲಿವಾಹನನು ಚೈತ್ರಶುದ್ಧ ಪಾಡ್ಯಮಿಯಂದು ಶಾಲಿವಾಹನ ರಾಜ ಸಿಂಹಾಸನಾರೂಢನಾದನೆಂದೂ, ಆಗಿನಿಂದ ಶಾಲಿವಾಹನ ಶಕೆ ಆರಂಭವಾಯಿತೆಂದೂ ಹೇಳಲಾಗುತ್ತದೆ. ಹಿಂದುಗಳು ಶಾಲಿವಾಹನ ಶಕೆಯ

ಸಂವತ್ಸರಗಳನ್ನಾಧರಿಸಿ ಆಯಾ ಸಂವತ್ಸರವನ್ನು ಚೈತ್ರ ಮಾಸದ ಪ್ರತಿಪದೆಯಿಂದ ಆರಂಭಿಸುವರು. ಯುಗಾದಿಯು ಚಂದ್ರಮಾನದ ಸಂವತ್ಸರದ ಆರಂಭದ ದಿನ. ಆದುದರಿಂದ ಇಂದಿನಿಂದ " ಶುಭಕೃತ್ " ಸಂವತ್ಸರ ಆರಂಭವಾಗುತ್ತದೆ.

ಯುಗಾದಿಯನ್ನು ಚಂದ್ರಮಾನ-ಸೌರಮಾನ ಹೀಗೆ ಎರಡು ಬಗೆಯಲ್ಲಿ ಆಚರಿಸುವ ಪದ್ಧತಿ ಇದೆ. ಚಂದ್ರನ ಚಲನೆಯನ್ನು ಗುರುತಿಸಿ ಮಾಡುವ ಪದ್ಧತಿಗೆ "ಚಂದ್ರಮಾನ ಯುಗಾದಿ" ಎನ್ನುವರು. ಹಾಗೂ ಸೂರ್ಯ ಮೇಷರಾಶಿಗೆ ಬಂದಾಗ "ಸೌರಮಾನ ಯುಗಾದಿ" ಎನ್ನುವರು.





# ಇಷ್ಟಾರ್ಥ ಸಿದ್ಧಿ ಶ್ರೀರಾಮ ಮಂತ್ರ

**ಓಂ ನಮೋ ಭಗವತೇ ರಾಮಾಯ ಸರ್ವ ಸೌಭಾಗ್ಯಂ**

**ದೇಹಿಮೇ ಸ್ವಾಹಾ ||**

ಇಷ್ಟಾರ್ಥ ಸಿದ್ಧಿ ಶ್ರೀರಾಮ ಮಂತ್ರವನ್ನು ಬೆಳಗ್ಗೆ-ಮಧ್ಯಾಹ್ನ - ಸಾಯಂಕಾಲ ಮೂರೂ ಕಾಲದಲ್ಲೂ ಕನಿಷ್ಠ ಪಕ್ಷ ನೂರೆಂಟು ಬಾರಿ ಪಠಿಸಬೇಕು. ಭಕ್ತನಿಗೆ ಅವನು ಕೋರಿದ್ದನ್ನು ದೊರಕಿಸಿಕೊಡುವ ಶಕ್ತಿ ಇಷ್ಟಾರ್ಥ ಸಿದ್ಧಿ ಶ್ರೀರಾಮ ಮಂತ್ರಕ್ಕಿದೆ.





# ಸ್ತ್ರೀ ಜಾತಕ ವಿಮರ್ಶೆ

## ಮದುವೆಯ ನಂತರ ಭಾಗ್ಯೋದಯ

| | | | |
|---|---|---|---|
| ಮಾಂದಿ | | ರಾಹು | |
| | 28-12-1983<br>9.20 AM<br>ಗ್ರಹ ಕುಂಡಲಿ | | |
| ಲಗ್ನ | | | |
| ಗುರು ರವಿ<br>ಬುಧ | ಶುಕ್ರ<br>ಕೇತು | ಶನಿ | ಚಂದ್ರ<br>ಕುಜ |

ಇದು ಮಕರ ಲಗ್ನದ ಸ್ತ್ರೀ ಜಾತಕ. ಲಗ್ನಾಧಿಪತಿ ಶನಿ ದಶಮದಲ್ಲಿ ಉಚ್ಚನಾಗಿ ಶಶಯೋಗದಲ್ಲಿರುವನು. ಪಿತೃ ಸ್ಥಾನವಾದ ನವಮದಲ್ಲಿ ಚಂದ್ರ-ಕುಜರಿದ್ದು ಪಾಪಗ್ರಹರಾದ ರಾಹು-ಮಾಂದಿ ದೃಷ್ಟರಾಗಿರುವರು. ಪಿತೃಸ್ಥಾನಾಧಿಪತಿ ಬುಧ ಮತ್ತು ಪಿತೃಕಾರಕ ರವಿ ವ್ಯಯಭಾವದಲ್ಲಿದ್ದು ಕುಜ-ಶನಿಯಿಂದ ದೃಷ್ಟರಾಗಿರುವರು.

ಜನ್ಮರಾಶಿ ಕನ್ಯಾದಿಂದ ನವಮದಲ್ಲಿ ರಾಹುವಿರುವನು. ನವಮಾಧಿಪತಿ ಶುಕ್ರನು ತೃತೀಯ ಭಾವದಲ್ಲಿ ಕೇತುಯುತನಾಗಿರುವನು.

ನವಾಂಶ ಕುಂಡಲಿಯಲ್ಲಿ ನವಮಾಧಿಪತಿ ಶನಿಯು ನೀಚನಾಗಿ ಕುಜನಿಂದ ದೃಷ್ಟನಾಗಿರುವನು. ಚಂದ್ರನಿಂದ ನವಮಾಧಿಪತಿ ಶುಕ್ರನು ಲಾಭದಲ್ಲಿದ್ದರೂ ರಾಹುಯುಕ್ತನಾಗಿರುವನು.

| | | | |
|---|---|---|---|
| | ಶನಿ ಗುರು | | ಲಗ್ನ |
| | | | ರಾಹು<br>ಶುಕ್ರ |
| ಕೇತು | | ನವಾಂಶ ಕುಂಡಲಿ | ರವಿ |
| | | | ಚಂದ್ರ<br>ಕುಜ ಬುಧ<br>ಮಾಂದಿ |

ಹೀಗಾಗಿ ಈಕೆ ತನ್ನ ರಾಹುದಶಾ ಶನಿಭುಕ್ತಿಯಲ್ಲಿ ತಂದೆಯನ್ನು ಬಾಲ್ಯದಲ್ಲಿಯೇ ಕಳೆದುಕೊಳ್ಳುವಂತಾಯಿತು. ಪಿತೃಸ್ಥಾನದಲ್ಲಿ ಕುಜನಿದ್ದು ಮಾಂದಿ-ರಾಹು ವೀಕ್ಷಿಸುತ್ತಿರುವುದು. ಪಿತೃಸ್ಥಾನಾಧಿಪತಿ ಹಾಗೂ ಪಿತೃಕಾರಕ ವ್ಯಯಭಾವಸ್ಥಿತಿ ಹಾಗೂ ಪಾಪದೃಷ್ಟಿಯಿಂದಾಗಿ ಈ ಜಾತಕಳು ಪಿತೃಸುಖದಿಂದ ವಂಚಿತಳಾದಳು. ತಂದೆಯ ಆರ್ಥಿಕ ಪರಿಸ್ಥಿತಿಯೂ

ಚೆನ್ನಾಗಿರಲಿಲ್ಲ.



ಈ ಜಾತಕದಲ್ಲಿ ಬಹುಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ವಿವಾಹ ಸ್ಥಾನಾಧಿಪತಿಯಾದ ಚಂದ್ರ

ಭಾಗ್ಯದಲ್ಲಿ ಚತುರ್ಥ - ಲಾಭಾಧಿಪತಿಯಾದ ಕುಜನೊಂದಿಗೆ ಇರುವುದರಿಂದ ವಿವಾಹದ ನಂತರ ಭಾಗ್ಯೋದಯವಾಗಿರುವುದು.



ನವಾಂಶ ಕುಂಡಲಿಯಲ್ಲಿ ಸಪ್ತಮಾಧಿಪತಿ ಲಾಭಸ್ಥಿತಿ ವಿವಾಹಾನಂತರ ಕೌಟುಂಬಿಕ ಸುಖಕ್ಕೆ ಕಾರಣವಾಯಿತು.

ಪ್ರಸ್ತುತ 05-08-2021ರಿಂದ 05-08-2040ರ ವರೆಗೆ ಶನಿದೆಶೆಯ ಕಾಲವಾಗಿರುತ್ತದೆ. ಶನಿದೆಶೆಯು ಶುಭವಲ್ಲ ಎಂಬ ಮಾತಿದೆ. ಆದರೆ ಈ ಜಾತಕಕ್ಕೆ ಶನಿ ಲಗ್ನಾಧಿಪತಿ-

ಕುಟುಂಬ - ಧನಸ್ಥಾನಾಧಿಪತಿಯಾಗಿ ದಶಮದಲ್ಲಿ ಉಚ್ಚನಾಗಿ ಇರುವುದರಿಂದ ಶುಭಫಲವನ್ನು ನೀಡುತ್ತಾನೆ.




ಜ್ಯೋತಿಷ ಮಿತ್ರ ಆನ್ಲೈನ್ ದಿನಪತ್ರಿಕೆ

ಗೌರವ ಸಂಪಾದಕರು : ಜೀವನ್ ಉಳ್ಳಾಲ್
ಸಂಪಾದಕರು : ಶ್ರೀಷ ಎಸ್.
ಕಚೇರಿ ವಿಳಾಸ : ಹತ್ವಾರ್ ಕಾಂಪ್ಲೆಕ್ಸ್, ಹೊಸಬೆಟ್ಟು, ಮಂಗಳೂರು - 575019.
PH : 9986671473 / 9535283535
jmonline@gmail.com www.jyothishamithra.com